ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ವಾರ್ತಾಪತ್ರ

(ತ್ರೈಮಾಸಿಕ ಪತ್ರಿಕೆ)




ಸಂಪುಟ : ೦೬
ಸಂಚಿಕೆ : ೧೪ ೧೪ (ಖಾಸಗಿ ಪ್ರಸಾರಕ್ಕಾಗಿ ಮಾತ್ರ) ಏಪ್ರಿಲ್ - ಜೂನ್ ೨೦೧೦ ಎಸ್.ವಿ. ಶ್ರೀನಿವಾಸರಾವ್



**ಪರಿವಿಡಿ**



*ವಿಳಾಸ*
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭/೨೬೬೭೬೭೭೩
ಇಮೇಲ್: bmsritrust@gmail.com

*ಶಾಖೆ*
ಬಿ.ಎಂ.ಶ್ರೀ. ಶತಮಾನೋತ್ಸವ ಭವನ
ಬೆಳ್ಳೂರು, ನಾಗಮಂಗಲ ತಾ॥, ಮಂಡ್ಯ ಜಿಲ್ಲೆ

## ಕರ್ನಾಟಕದ ಜನಪ್ರಿಯ ಮುಖ್ಯಮಂತ್ರಿ

# ಡಾ. ಬಿ.ಎಸ್. ಯಡ್ಯೂರಪ್ಪರಿಗೆ ಅಭಿನಂದನೆಗಳು



ದಿನಾಂಕ: ೧೬-೧೨-೨೦೦೯ರಂದು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ವಿದ್ವಾಂಸರುಗಳ ನಿಯೋಗ ಮುಖ್ಯಮಂತ್ರಿಗಳನ್ನು ಭೇಟಿ ಮಾಡಿದಾಗ, ಪ್ರತಿಷ್ಠಾನದ ಪ್ರಗತಿ ಹಾಗೂ ಕಾರ್ಯಯೋಜನೆಗಳನ್ನು ಮೆಚ್ಚಿ ಬಹಳ ವಿಶ್ವಾಸದಿಂದ ೫೦ ಲಕ್ಷ ರೂಪಾಯಿಗಳ ಅನುದಾನವನ್ನು ೨ ಕಂತುಗಳಲ್ಲಿ ನೀಡುವುದಾಗಿ ಘೋಷಿಸಿದ್ದಾರೆ. ಅದಕ್ಕೆ ಕೃತಜ್ಞತೆ ಅರ್ಪಿಸುತ್ತಿದ್ದೇವೆ. ಆ ಹಣದ ಬಿಡುಗಡೆ ಬಗ್ಗೆ ಆದೇಶ ಇನ್ನೂ ಬಂದಿರುವುದಿಲ್ಲ. ಕೃಪೆಯಿಟ್ಟು ಶೀಘ್ರವೇ ಆದೇಶ ಹೊರಡಿಸಿ ಹಣ ಬಿಡುಗಡೆ ಮಾಡಿ ಉಪಕರಿಸಬೇಕಾಗಿ ವಿನಮ್ರವಾಗಿ ಮುಖ್ಯಮಂತ್ರಿಗಳನ್ನು ವಿನಂತಿಸಿಕೊಳ್ಳುತ್ತಿದ್ದೇವೆ.

ವಂದನೆಗಳೊಂದಿಗೆ

ನಾಡೋಜ ಜಿ. ನಾರಾಯಣ
ಅಧ್ಯಕ್ಷರು



೨೮-೦೪-೧೦ರಂದು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ
ದಿ॥ ಪುಟ್ಟಚ್ಚಮ್ಮ-ವೆಂಕಟರಾಮಯ್ಯ ದತ್ತಿ ಪ್ರಶಸ್ತಿ ಪ್ರದಾನ ಸಮಾರಂಭ

# ಸಂಪಾದಕೀಯ



ಡಾ. ಪಿ.ವಿ. ನಾರಾಯಣ ಅವರು ಖ್ಯಾತ ಸೃಜನಶೀಲ ಹಾಗೂ ಸೃಜನೇತರ ಸಾಹಿತಿಯಾಗಿರುವುದಲ್ಲದೆ, ಸಂಶೋಧನೆ, ಗ್ರಂಥಸಂಪಾದನೆ ಮತ್ತು ಅನುವಾದ ಕ್ಷೇತ್ರಗಳಲ್ಲೂ ಅಮೂಲ್ಯ ಕೊಡುಗೆಗಳನ್ನು ನೀಡಿರುತ್ತಾರೆ. ಕನ್ನಡ ನಾಡಿನ ಎಲ್ಲಾ ಜನಪರ, ಜನಹಿತ, ನೆಲ, ಜಲ, ಭಾಷಾ ಕ್ಷೇತ್ರಗಳಿಗೆ ಸಂಬಂಧಿಸಿದ ಎಲ್ಲ ಚಟುವಟಿಕೆಗಳಲ್ಲೂ ಸಕ್ರಿಯವಾಗಿ ಭಾಗವಹಿಸಿ ಪ್ರಬುದ್ಧ ಚಳುವಳಿಗಾರರಾಗಿಯೂ ಖ್ಯಾತರಾಗಿದ್ದಾರೆ. ಶೈಕ್ಷಣಿಕ ಕ್ಷೇತ್ರದಲ್ಲಿ ಬೋಧಕರಾಗಿ, ಪ್ರಾಧ್ಯಾಪಕರಾಗಿ ಸಾವಿರಾರು ವಿದ್ಯಾರ್ಥಿಗಳ ಕಣ್ಮಣಿಗಳಾಗಿರುತ್ತಾರೆ. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾಗಿ ಜನವರಿ ೨೦೦೮ರಿಂದ ಜೂನ್ ೨೦೧೦ರ ವರೆಗೆ ಬಹಳ ಯಶಸ್ವಿಯಾಗಿ ಕಾರ್ಯನಿರ್ವಹಿಸಿ, ಪ್ರತಿಷ್ಠಾನದ ಸಂಪನ್ಮೂಲ ವೃದ್ಧಿಸಲು ಅಹರ್ನಿಶಿ ಶ್ರಮಿಸಿ ಯಶಸ್ವಿಗೊಳಿಸಿದ್ದಾರೆ. ಮಾನ್ಯ ಮುಖ್ಯಮಂತ್ರಿಗಳ ಬಳಿಗೆ ಪ್ರತಿಷ್ಠಾನದ ಹಿರಿಯ ಸದಸ್ಯರು ವಿದ್ವಾಂಸರುಗಳ ನಿಯೋಗವನ್ನು ಕೊಂಡೊಯ್ದು ವಿಶೇಷ ೫೦ ಲಕ್ಷ ರೂಪಾಯಿಗಳ ಅನುದಾನದ (೨ ಕಂತುಗಳಲ್ಲಿ) ವಾಗ್ದಾನ ಪಡೆಯಲು ಯಶಸ್ವಿಯಾಗಿದ್ದಾರೆ. ಕನ್ನಡ ಭಾಷೆಗೆ ಶಾಸ್ತ್ರೀಯ ಭಾಷಾಸ್ಥಾನಮಾನ ದೊರೆತಿರುವ ಹಿನ್ನೆಲೆಯಲ್ಲಿ, ಹಳೆಗನ್ನಡ ಭಾಷೆಯ ಡಿಪ್ಲೋಮಾ ಮತ್ತು ಹಸ್ತಪ್ರತಿ ಅಧ್ಯಯನ ಸರ್ಟಿಫಿಕೇಟ್ ಕೋರ್ಸ್ ಪ್ರಾರಂಭಿಸುವ ಸಲುವಾಗಿ ಕನ್ನಡ ವಿಶ್ವವಿದ್ಯಾಲಯ ಹಂಪಿ, ಹಾಗೂ ಕುಪ್ಪಂನ ದ್ರಾವಿಡ ವಿಶ್ವವಿದ್ಯಾಲಯಗಳ ಮಾನ್ಯತೆಗಾಗಿ ಶ್ರಮಿಸಿದ್ದಾರೆ. ಎಂ.ವಿ.ಸೀ. ಅವರ ಶತಮಾನೋತ್ಸವ ಸಮಾರಂಭವನ್ನೂ ಯಶಸ್ವಿಯಾಗಿ ವರ್ಷಪೂರ್ತಿ ನಡೆಸಲು ಯೋಜನೆಯನ್ನು ಸಿದ್ಧಪಡಿಸಿ, ಅನುಷ್ಠಾನಗೊಳಿಸಲು ಸೂಕ್ತ ವ್ಯವಸ್ಥೆಯನ್ನು ಮಾಡಿದ್ದರು.

ಅತ್ಯಂತ ಜನಪ್ರಿಯರಾಗಿ, ತ್ರಿಕರಣಪೂರ್ವಕವಾಗಿ ಅಹರ್ನಿಶಿ ಪ್ರತಿಷ್ಠಾನದ ಪ್ರಗತಿಗಾಗಿ ಶ್ರಮಿಸಿರುವ ಡಾ. ಪಿ.ವಿ. ನಾರಾಯಣ ಅವರು ತಮ್ಮ ವೈಯಕ್ತಿಕ ಕಾರಣಗಳಿಂದಾಗಿ ಪ್ರತಿಷ್ಠಾನದ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆಯನ್ನು ಸಲ್ಲಿಸಿದ್ದಾರೆಂದು ತಿಳಿಸಲು ವಿಷಾದಿಸುತ್ತೇವೆ. ಇವರ ರಾಜೀನಾಮೆಯನ್ನು ಕೆಲಕಾಲ ಕಾರ್ಯಕಾರಿ ಸಮಿತಿ ಅಂಗೀಕರಿಸದೆ, ಅವರೇ ಅಧ್ಯಕ್ಷರಾಗಿ ಮುಂದುವರಿಯುವಂತೆ ಕಾರ್ಯಸಮಿತಿ ಸದಸ್ಯರೆಲ್ಲಾ ಮನವಿಯನ್ನು ಸಲ್ಲಿಸಿದ್ದರೂ, ತಮ್ಮ ನಿಲುವನ್ನು ಬದಲಿಸದೆ ಹೋದುದರಿಂದ ಕಾರ್ಯಕಾರಿ ಸಮಿತಿ ಒಲ್ಲದಮನಸ್ಸಿನಿಂದ ಅವರ ರಾಜೀನಾಮೆಯನ್ನು ಅಂಗೀಕರಿಸಿ, ಪ್ರಸ್ತುತ ಗೌ. ಅಧ್ಯಕ್ಷರಾಗಿರುವ ನಾಡೋಜ ಜಿ. ನಾರಾಯಣರವರೇ ಅಧ್ಯಕ್ಷರಾಗಿದ್ದು ವ್ಯವಹಾರಿಕ ಕೆಲಸಕಾರ್ಯಗಳನ್ನು ಸುಗಮವಾಗಿ ನಡೆಸಿಕೊಂಡು ಹೋಗಲು ಪ್ರಾರ್ಥಿಸಿ, ಬಹಳ ಕಷ್ಟಪಟ್ಟು ಅವರನ್ನು ಒಪ್ಪಿಸಿದೆ. ಆರೋಗ್ಯ ಸರಿ ಇಲ್ಲದಿದ್ದರೂ ಪ್ರತಿಷ್ಠಾನದ ಹಿತದೃಷ್ಟಿಯಿಂದ ಈ ವಿಶೇಷ ಜವಾಬ್ದಾರಿಯನ್ನು ಹೊರಲು ಸಿದ್ಧರಾಗಿರುವ ಸನ್ಮಾನ್ಯ ಡಾ.ಜಿ. ನಾರಾಯಣ ಅವರಿಗೆ ಪ್ರತಿಷ್ಠಾನ ಆಭಾರಿಯಾಗಿದೆ.



ಪ್ರತಿಷ್ಠಾನ ಡಾ. ಪಿ.ವಿ. ನಾರಾಯಣ ಅವರ ಅಮೂಲ್ಯ ಸೇವೆಯನ್ನು ಕೃತಜ್ಞತೆಯಿಂದ ನೆನೆಯುತ್ತಾ, ಗೌರವಪೂರ್ಣವಾಗಿ ಅವರಿಗೆ ಶುಭ ಕೋರುತ್ತಿದೆ.

■ *ಎಸ್.ವಿ. ಶ್ರೀನಿವಾಸರಾವ್*
ಸಂಪಾದಕರು

# ಪ್ರತಿಷ್ಠಾನದ ವಾರ್ತೆ

## ಎಂ.ವಿ.ಸೀ. ಶತಮಾನೋತ್ಸವ ಕಾರ್ಯಕ್ರಮಗಳು

### ಎಂ.ವಿ.ಸೀ. ಶತಮಾನೋತ್ಸವದ ಏಪ್ರಿಲ್ ತಿಂಗಳ ಕಾರ್ಯಕ್ರಮ-೭

ದಿನಾಂಕ : ೦೯-೦೪-೨೦೧೦ ಶುಕ್ರವಾರ ಸಂಜೆ ೫-೩೦ ಗಂಟೆಗೆ ನಡೆದ ಈ ಕಾರ್ಯಕ್ರಮ ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟದ ಸಹಯೋಗದೊಂದಿಗೆ ನಡೆಯಿತು. ಕ.ಕೈ.ವಾ. ಕ.ಸಂ. ಒಕ್ಕೂಟದ ಅಧ್ಯಕ್ಷರಾದ ಶ್ರೀ ಪ್ರಭಾಕರ ರೆಡ್ಡಿ ಪ್ರಾಸ್ತಾವಿಕ ಭಾಷಣ ಮಾಡಿದರು. ಡಾ. ಪಿ.ವಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದರು. ಪ್ರೊ. ಜಿ. ಅಶ್ವತ್ಥನಾರಾಯಣ ಅವರು ಎಂ.ವಿ.ಸೀ. ರಚಿತ 'ಜೀವನ ಚರಿತ್ರೆಗಳು' ಕುರಿತು ಉಪನ್ಯಾಸ ನೀಡಿದರು.



ಕಾರ್ಯಕ್ರಮಗಳ ಸಂಚಾಲಕರಾದ ಶ್ರೀ ರಾ.ನಂ. ಚಂದ್ರಶೇಖರ್ ಸದಸ್ಯರನ್ನೂ ಸ್ವಾಗತಿಸಿ ಕಾರ್ಯಕ್ರಮ ನಿರೂಪಿಸಿದರು. ಶ್ರೀ ವಿಜಯಕುಮಾರ್ ಕಾರ್ಯದರ್ಶಿ ಕ.ಕೈ.ವಾ.ಕ.ಸಂ. ಒಕ್ಕೂಟ, ವಂದನಾರ್ಪಣೆ ಮಾಡಿದರು.

### ಮೇ ತಿಂಗಳ ಕಾರ್ಯಕ್ರಮ-೮

ದಿನಾಂಕ: ೦೯-೦೫-೨೦೧೦ ಸಂಜೆ ೫-೩೦ ಗಂಟೆಗೆ ನಡೆದ ಈ ಕಾರ್ಯಕ್ರಮ ಜಿ. ಟಿ. ಆರ್. ಇ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘದ ಸಹಯೋಗದೊಡನೆ ನಡೆಯಿತು. ಡಾ. ವಿಜಯಾ, ಹಿರಿಯ ಪತ್ರಕರ್ತೆ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಜಿ.ಟಿ.ಆರ್. ಇ.ಯ ತಾಂತ್ರಿಕ ಅಧಿಕಾರಿ ಶ್ರೀ ಅ.ನಾ. ವಿಜಯಶಂಕರ್ ಆಗಮಿಸಿದ್ದರು. ನಿವೃತ್ತ ಕನ್ನಡ ಪ್ರಾಧ್ಯಾಪಕ ಪ್ರೊ. ಅಬ್ದುಲ್ ಬಷೀರ್ **'ಎಂ.ವಿ.ಸೀ. ಅವರ ಕಾವ್ಯ ಮೀಮಾಂಸೆ ವಿಚಾರಗಳು'** ಬಗ್ಗೆ ಬಹಳ ಉಪಯುಕ್ತ ಹಾಗೂ ವಿಚಾರಪೂರ್ಣ ಉಪನ್ಯಾಸ ನೀಡಿದರು. ಶ್ರೀ ಎಸ್.ವಿ. ಶ್ರೀನಿವಾಸರಾವ್ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ರಾ. ನಂ. ಚಂದ್ರಶೇಖರ್ ಮುಖ್ಯ ಅತಿಥಿಗಳ ಪರಿಚಯ ಮಾಡಿ ಎಲ್ಲರನ್ನು ಸ್ವಾಗತಿಸಿದರು. ಶ್ರೀ ಶ್ರ.ದೇ. ಪಾರ್ಶ್ವನಾಥ್ ಕಾರ್ಯಕ್ರಮ ನಿರೂಪಿಸಿದರು. ಅಧ್ಯಕ್ಷತೆ ವಹಿಸಿದ್ದ ಡಾ. ವಿಜಯಾರವರು, ಪ್ರೊ. ಎಂ.ವಿ.ಸೀ. ಅವರ ವಿಸ್ತೃತ ವೈವಿಧ್ಯಪೂರ್ಣ ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ಜನಪರ ಚಟುವಟಿಕೆಗಳ ಬಗ್ಗೆ ಮಾಹಿತಿ ನೀಡಿ ಅವರ ಕಾರ್ಯ ವೈಖರಿಯನ್ನೂ ಪ್ರಶಂಸಿದರು. ಕಾರ್ಯಕ್ರಮದ ಕೊನೆಯಲ್ಲಿ ಜಿ. ಟಿ. ಆರ್. ಇ ಯ ಪ್ರಧಾನಕಾರ್ಯದರ್ಶಿ ಶ್ರೀ ಬೇ.ಹ. ಶ್ರೀಧರ್ ಸರ್ವರನ್ನೂ ವಂದಿಸಿದರು.

### ಜೂನ್ ತಿಂಗಳ ಕಾರ್ಯಕ್ರಮ - ೯

ದಿನಾಂಕ: ೦೯-೦೬-೨೦೧೦ರಂದು ಸಂಜೆ ೫-೩೦ಕ್ಕೆ ಆಯೋಜಿಸಿದ್ದ ಈ ಕಾರ್ಯಕ್ರಮ ನಾಗನಾಥಪುರ ಮೈಕೋ ಕನ್ನಡ ಸಂಘದ ಸಹಯೋಗದಲ್ಲಿ ನಡೆಯಿತು. ಡಾ. ದೇವರಕೊಂಡಾರೆಡ್ಡಿ, ಖ್ಯಾತ ಶಾಸನತಜ್ಞರು, ಅಧ್ಯಕ್ಷತೆ ವಹಿಸಿದ್ದರು. ಕನ್ನಡ ಪ್ರಾಧ್ಯಾಪಕ ಡಾ. ಎಸ್. ಎಲ್. ಶ್ರೀನಿವಾಸಮೂರ್ತಿರವರು **'ಎಂ.ವಿ.ಸೀ. ಅವರ ಸಂಶೋಧನಾ ಲೇಖನಗಳು'** ಈ ಬಗ್ಗೆ ವಿಚಾರಪೂರ್ಣ ಉಪನ್ಯಾಸ ನೀಡಿದರು. ಮೈಕೋ ಕನ್ನಡ ಸಂಘದ ಸಂಘಟನಾ ಕಾರ್ಯದರ್ಶಿ ಶ್ರೀ ಟಿ.ಆರ್. ಪಾಲಾಕ್ಷ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಇವರು ತಮ್ಮ ಭಾಷಣದಲ್ಲಿ ಮೈಕೋ ಕನ್ನಡ ಸಂಘದ ಚಟುವಟಿಕೆಗಳ ಬಗ್ಗೆ ವಿವರಣಾತ್ಮಕ ಮಾಹಿತಿ ನೀಡಿದರು. ಅಧ್ಯಕ್ಷತೆ ವಹಿಸಿದ್ದ ಡಾ. ದೇವರ ಕೊಂಡಾರೆಡ್ಡಿ ಎಂ.ವಿ.ಸೀ. ಅವರ ಸಂಶೋಧನಾ ಸಾಮರ್ಥ್ಯವನ್ನೂ ಉದಾಹರಣೆಯೊಡನೆ ಪ್ರಶಂಸಿದರು ಹಾಗೂ ಸಂಸ್ಥೆಯೊಡನೆ ತಮಗಿರುವ ನಿಕಟ ಸಂಬಂಧದ ಬಗ್ಗೆಯೂ ಮಾಹಿತಿ ನೀಡಿ, ಪ್ರತಿಷ್ಠಾನದ ಕಾರ್ಯಚಟುವಟಿಕೆಗಳನ್ನು ಪ್ರಶಂಸಿದರು. ಮೈಕೋ ಕನ್ನಡ ಸಂಘದ ಶ್ರೀ ರಾಜೇಶ್ ಜಿ.ಬಿ. ಅವರು ವಂದನಾರ್ಪಣೆ ಮಾಡಿದರು. ಈ ಕಾರ್ಯಕ್ರಮದ ಸಂಚಾಲಕರಾದ ಶ್ರೀ ರಾ. ನಂ. ಚಂದ್ರಶೇಖರ್ ಹಾಗೂ ಶ್ರ.ದೇ. ಪಾರ್ಶ್ವನಾಥ್ ಅವರು ಸ್ವಾಗತ ಹಾಗೂ ನಿರೂಪಣಾ ಕಾರ್ಯಕ್ರಮವನ್ನು ನೆರವೇರಿಸಿದರು.

### ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಇತರ ಕಾರ್ಯಕ್ರಮಗಳು:

**(೧) 'ಸಿರಿ ಸಂಗೀತ'**

**ದಿನಾಂಕ:೨೦-೦೪-೨೦೧೦ರಂದು** ಸಂಜೆ ೬-೦೦ ಗಂಟೆಗೆ ನಾರಾಯಣಶರ್ಮ ಸಂಸ್ಕೃತಿ ಕೇಂದ್ರ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಹಯೋಗದೊಡನೆ **'ಶ್ರೀರಾಮಾನುಜ ಜಯಂತಿ ಅಂಗವಾಗಿ 'ಸಿರಿಸಂಗೀತ'ದಲ್ಲಿ 'ಶ್ರೀವೈಷ್ಣವ ಹರಿದಾಸ ನಾರಾಯಣಶರ್ಮರ ಜಯಂತಿ'** ಕಾರ್ಯಕ್ರಮವನ್ನು ಏರ್ಪಡಿಸಿತ್ತು.

ಹರಿದಾಸ ನಾರಾಯಣಶರ್ಮರನ್ನು ಕುರಿತು, ಕನ್ನಡ ಉಪನ್ಯಾಸಕರಾದ ಶ್ರೀ ಆರ್. ವಾದಿರಾಜ್‌ರವರು ವಿಚಾರಪೂರ್ಣ ಭಾಷಣಮಾಡಿ ನಾರಾಯಣಶರ್ಮರ ವಿದ್ವತ್ ಬಗ್ಗೆ ಮಾಹಿತಿ ನೀಡಿ ಅವರು ವೈಷ್ಣವಹರಿದಾಸ ಸಾಹಿತ್ಯಕ್ಕೆ ನೀಡಿರುವ ಕೊಡುಗೆಗಳನ್ನು

ಪ್ರಶಂಸಿದರು. ಹಿರಿಯ ಸಾಹಿತಿ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅಧ್ಯಕ್ಷತೆ ವಹಿಸಿ, ತಮ್ಮ ಭಾಷಣದಲ್ಲಿ ಹರಿದಾಸರುಗಳು ಕನ್ನಡ ಸಾಹಿತ್ಯವನ್ನು ಸಂಪನ್ನಗೊಳಿಸಿದ್ದಾರೆಂದು ಹೇಳಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಗಳು ತ್ರಿವೇಣಿ ವಾಹಿನಿಯಾಗಿ ಹರಿದು ಬಂದಿದೆ, ಇವರುಗಳು ಹರಿದಾಸ ಸಾಹಿತ್ಯವನ್ನು ಸಂಪನ್ನಗೊಳಿಸುವ ಸ್ತುತ್ಯರ್ಹ ಕಾರ್ಯವನ್ನು ಮಾಡಿದ್ದಾರೆಂದು ಪ್ರಶಂಸಿದರು.

ಶ್ರೀಮತಿ ವಿದುಷಿ ಎಂ.ವಿ. ಸುಕನ್ಯ ಅವರು, ವಿದ್ವಾಂಸರಾದ ಶ್ರೀ ಆರ್. ನಾಗರಾಜ್ ಅವರ ಮೃದಂಗ ಹಾಗೂ ಶ್ರೀ ಪಿ.ಎಸ್. ರಾಘವೇಂದ್ರ ಅವರುಗಳ ಸಹಯೋಗದಲ್ಲಿ 'ಶ್ರೀವೈಷ್ಣವ ಕೀರ್ತನ ಸೌರಭ' ಸವಿಯನ್ನೂ ಸಭಿಕರಿಗೆ ನೀಡಿ ರಂಜಿಸಿದರು. ನಾರಾಯಣ ಶರ್ಮ ಸಂಸ್ಕೃತಿ ಸಂಸ್ಕೃತಿ ಕೇಂದ್ರದ ಸ್ಥಾಪಕರಾದ ಡಾ. ನಾ. ಗೀತಾಚಾರ್ಯ ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ, ಹಿರಿಯರ ಹೆಸರಿನಲ್ಲಿ ತಾವು ಸ್ಥಾಪಿಸಿರುವ ಈ ಸಂಸ್ಥೆಯ ಚಟುಟಿಕೆಗಳನ್ನು ವಿವರಿಸಿ, ಹಲವು ಸ್ಮರಣೀಯ ಘಟನೆಗಳನ್ನು ನೆನಪಿಸಿಕೊಂಡರು. ಕಾರ್ಯಕ್ರಮದ ಕೊನೆಯಲ್ಲಿ ವಂದನಾರ್ಪಣೆ ಸಹಮಾಡಿದರು.

### (೨) ಪುಟ್ಟಚ್ಚಮ್ಮಾದತ್ತಿ ಸಾಹಿತ್ಯ ಪ್ರಶಸ್ತಿ

**ದಿನಾಂಕ: ೨೮-೦೪-೨೦೧೦ರಂದು ಸಂಜೆ ೬.೦೦ ಗಂಟೆಗೆ ದಿ. ಪುಟ್ಟಚ್ಚಮ್ಮ ವೆಂಕಟರಾಮಯ್ಯ ದತ್ತಿನಿಧಿ ಪ್ರಶಸ್ತಿ ಪ್ರದಾನ ಕಾರ್ಯಕ್ರಮ ಏರ್ಪಡಿಸಲಾಗಿತ್ತು.** ದತ್ತಿನಿಧಿ ದಾನಿ ಶ್ರೀ ಎಸ್.ವಿ. ಶ್ರೀನಿವಾಸರಾವ್, ಅವರ ಪತ್ನಿ ಅನುಸೂಯ ಹಾಗೂ ಬಂಧು ವರ್ಗದ ಸದಸ್ಯರುಗಳು ಉಪಸ್ಥಿತರಿದ್ದರು.




ಪ್ರಶಸ್ತಿ ಪ್ರದಾನ ಕಾರ್ಯಕ್ರಮದ ಉದ್ಘಾಟನೆಯನ್ನು ನಾಡೋಜ ಜಿ. ನಾರಾಯಣ ನೆರವೇರಿಸಿದರು. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರಾದ ಸಾಹಿತಿ ಶ್ರೀ ಮನು ಬಳಿಗಾರ್ ಅಧ್ಯಕ್ಷತೆ ವಹಿಸಿದ್ದರು. ಬೆಂಗಳೂರು ದೂರದರ್ಶನ ಕೇಂದ್ರದ ಹಿರಿಯ ನಿರ್ದೇಶಕ ಡಾ. ಮಹೇಶ್ ಜೋಶಿ ಈ ದತ್ತಿನಿಧಿ ಪ್ರಶಸ್ತಿಯ ಸ್ಪರ್ಧೆಯಲ್ಲಿ ವಿಜೇತರಾಗಿದ್ದ ಕತೆಗಾರ್ತಿ 'ಶ್ರೀಮತಿ ಸುನಂದಾ ಪ್ರಕಾಶ ಕಡಮೆ' ಅವರಿಗೆ ಪ್ರಶಸ್ತಿ ನೀಡಿ ಅವರ ಕಥನ ಸಾಮರ್ಥ್ಯವನ್ನು ಪ್ರಶಂಸಿದರು. ಹಿಂದೊಂದು ಕಾರ್ಯಕ್ರಮದಲ್ಲಿ ಈ ಕೃತಿಗೆ, ಇದೇ ಸಾಹಿತ್ಯ ಪ್ರಶಸ್ತಿ ಬಂದಿರುವುದನ್ನು ನೆನಪಿಸಿಕೊಂಡರು.

ಈ ಸ್ಪರ್ಧೆಗೆ ಶ್ರೀ ಎನ್. ಎಸ್. ಶ್ರೀಧರಮೂರ್ತಿ (ಸಂಪಾದಕರು 'ಮಲ್ಲಿಗೆ'), ಶ್ರೀ ಮಹಾಬಲಮೂರ್ತಿ ಕೊಡ್ಲೆಕೆರೆ, ಹಾಗೂ ಶ್ರೀಮತಿ ಶಾಂತಾಕುಮಾರಿ ತೀರ್ಪುಗಾರರಾಗಿದ್ದರು. ಕಾರ್ಯಕ್ರಮದ ಕೊನೆಯಲ್ಲಿ, ಪ್ರಶಸ್ತಿ ಸ್ವೀಕರಿಸಿದ ಸಾಹಿತಿ ಶ್ರೀಮತಿ ಸುನಾಂದಾ ಪ್ರಕಾಶ ಕಡಮೆ ಮಾತನಾಡಿ ಪ್ರಶಸ್ತಿ ನೀಡಿದ ಪ್ರತಿಷ್ಠಾನಕ್ಕೆ ವಂದನೆ ಸಲ್ಲಿಸಿದರು. ಶ್ರೀ ಮನು ಬಳಿಗಾರ್ ಅವರು ಅಧ್ಯಕ್ಷ ಭಾಷಣಮಾಡಿ ಪ್ರತಿಷ್ಠಾನದ ಕಾರ್ಯ ಚಟುವಟಿಕೆಗಳನ್ನು ಪ್ರಶಂಸಿದರು ಹಾಗೂ ಪ್ರತಿಷ್ಠಾನಕ್ಕೆ ಈ ವರ್ಷ ೮ ಲಕ್ಷ ರೂ.ಗಳ ಅನುದಾನ ನೀಡುವುದಾಗಿಯೂ ತಿಳಿಸಿದರು. ಈ ಸಿಹಿಸುದ್ದಿಯನ್ನು ಎಲ್ಲರೂ ಕರತಾಡನ ಮೂಲಕ ಸ್ವಾಗತಿಸಿದರು. ಪ್ರಾರಂಭದಲ್ಲಿ ಪ್ರಾಸ್ತಾವಿಕ ಭಾಷಣ ಮಾಡಿದ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ತಮ್ಮ ದತ್ತು ತಂದೆ-ತಾಯಿಯರ ಸವಿನೆನಪಿಗಾಗಿ ಸ್ಥಾಪಿಸಿರುವ ಈ ದತ್ತಿನಿಧಿಯಿಂದ ಒಂದು ವರ್ಷ ಕಥಾಸ್ಪರ್ಧೆ, ಮತ್ತೊಂದು ವರ್ಷ ಕಾದಂಬರಿ ಸ್ಪರ್ಧೆ ನಡೆಸಿ ಪ್ರತಿ ವರ್ಷವೂ ಪ್ರಶಸ್ತಿ ಪ್ರದಾನಮಾಡಲಾಗುವುದೆಂದು ತಿಳಿಸಿ ಸರ್ವರನ್ನೂ ಸ್ವಾಗತಿಸಿದರು. ಕೊನೆಯಲ್ಲಿ ಡಾ. ನಾ. ಗೀತಾಚಾರ್ಯ ವಂದನಾರ್ಪಣೆ ಮಾಡಿದರು.

### (೩) ಗುರುವಂದನಾ ಕಾರ್ಯಕ್ರಮ

ದಿನಾಂಕ: ೦೧-೦೫-೨೦೧೦ರಂದು ಸಂಜೆ ೫-೩೦ ಗಂಟೆಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ **'ಸಿರಿಕಂಟ'** ಪಿಎಚ್.ಡಿ. ವಿದ್ಯಾರ್ಥಿ ವೇದಿಕೆ **'ಗುರುವಂದನಾ'** ಕಾರ್ಯಕ್ರಮ ಆಯೋಜಿಸಿತ್ತು, ಅಧ್ಯಕ್ಷತೆಯನ್ನು ಡಾ. ಜಿ. ನಾರಾಯಣ ವಹಿಸಿದ್ದರು. ಪಿಎಚ್.ಡಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದ್ದ ಪ್ರೊ. ಡಿ. ಲಿಂಗಯ್ಯ, ಪ್ರೊ. ಎನ್. ಬಸವಾರಾಧ್ಯ, ಡಾ. ಎಂ.ಎಲ್. ಲಲಿತಮ್ಮ, ಡಾ. ಅನಂತಪದ್ಮನಾಭರಾವ್‌ರವರುಗಳಿಗೆ ಡಾ. ಜಿ. ನಾರಾಯಣರವರ ಮೂಲಕ ಪಿಎಚ್.ಡಿ ಪಡೆದ ಡಾ. ಸುರೇಶ್ ನಾಗಲಮಡಿಕೆ, ಡಾ. ನಾಗರಾಜ ಹೊಸೂರಕರ್, ಡಾ. ಶಾಂತಕುಮಾರಿ ಸಿ.ಎಂ., ಡಾ. ರೇಣುಕಾಪ್ರಸಾದ್, ಡಾ. ರಮಾನಂದ, ಡಾ. ಮು. ಹಾಲಪ್ಪ ಅವರುಗಳು ಅಭಿನಂದನೆ ಸಲ್ಲಿಸಿದರು. ಪ್ರಾರಂಭದಲ್ಲಿ ಎಂ.ಫಿಲ್ ಮತ್ತು ಪಿಎಚ್.ಡಿ. ಶಿಕ್ಷಣದ ಎಂವಿಸೀ ಸಂಶೋಧನ ಕೇಂದ್ರದ ನಿರ್ದೇಶಕಿಯಾದ ಡಾ. ವಿಜಯಾ ಸುಬ್ಬರಾಜ್ ಪ್ರಾಸ್ತಾವಿಕ ಭಾಷಣ ಮಾಡಿ ಸದಸ್ಯರ್ನು ಸ್ವಾಗತಿಸಿದರು. ಡಾ. ನಾ. ಗೀತಾಚಾರ್ಯ ಎಲ್ಲರನ್ನು ವಂದಿಸಿದರು.

### (೪) ಪಿಎಚ್.ಡಿ. ಎಂ.ಫಿಲ್ ಪದವಿ ಪತ್ರ ಪ್ರದಾನ

ದಿನಾಂಕ: ೦೮-೦೬-೨೦೧೦ರಂದು ಸಂಜೆ ೫-೩೦ ಗಂಟೆಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ **ಎಂ.ಫಿಲ್ ಪದವಿ ಪತ್ರ ಪ್ರದಾನ ಹಾಗೂ ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಅಭಿನಂದನಾ ಕಾರ್ಯಕ್ರಮವನ್ನು ಆಯೋಜಿಸಿತ್ತು.**

ಕಾರ್ಯಕ್ರಮದ ಉದ್ಘಾಟನೆಯನ್ನು ಪ್ರತಿಷ್ಠಾನದ ಅಧ್ಯಕ್ಷರಾದ ನಾಡೋಜ ಜಿ. ನಾರಾಯಣ ದೀಪ ಬೆಳಗುವ ಮೂಲಕ ನೆರವೇರಿಸಿದರು.



ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಜಯರಾಮರಾಜೇ ಅರಸ್ ಐ.ಎ.ಎಸ್, ಅವರು ಅಧ್ಯಕ್ಷತೆ ವಹಿಸಿದ್ದರು. ಖ್ಯಾತ ಸಂಶೋಧಕರಾದ ಡಾ. ಎಂ. ಚಿದಾನಂದಮೂರ್ತಿ ಅವರು ಪದವಿ ಪತ್ರಗಳನ್ನು ಪಿಎಚ್.ಡಿ ಪಡೆದ ವಿದ್ಯಾರ್ಥಿಗಳಾದ ಡಾ. ಸುರೇಶ್ ನಾಗಲಮಡಿಕೆ, ಡಾ. ನಾಗರಾಜ ಹೊಸೂರಕರ್, ಡಾ. ಶಾಂತಾಕುಮಾರಿ, ಡಾ. ರೇಣುಕಾ ಪ್ರಸಾದ್, ಡಾ. ಕೆ.ವಿ.ರಮಾನಂದ, ಡಾ. ಮು. ಹಾಲಪ್ಪ, ಅವರಿಗೆ ಅಭಿನಂದಿಸಿದರು ಹಾಗೆಯೇ ಎಂ.ಫಿಲ್ ಪದವಿ ಪಡೆದ ೮ ಜನ ವಿದ್ಯಾರ್ಥಿಗಳಾದ ಎನ್. ಸೌಮ್ಯ, ಸುಜಾತ. ಎ., ಉಮ್ಮೇಸಲ್ಮ, ಪಿ. ಮುನಿರಾಜ, ವೀಣಾಕುಮಾರ್, ಸೈಯದ್ ಮುಯಿನ್, ಎಂ.ಸಿ. ಕೃಷ್ಣಮೂರ್ತಿ, ಸಂಧ್ಯ. ವಿ. ಅವರಿಗೆ ವಿತರಿಸಿ ಶುಭ ಹಾರೈಸಿದರು.

ಕಾರ್ಯಕ್ರಮದ ಪ್ರಾರಂಭದಲ್ಲಿ ವ್ಯ. ಕಾರ್ಯದರ್ಶಿ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅತಿಥಿಗಳನ್ನು ಸ್ವಾಗತಿಸಿ ಅವರ ಕಿರುಪರಿಚಯವನ್ನು ನೀಡಿದರು. ಪ್ರಾಸ್ತಾವಿಕ ಭಾಷಣ ಮಾಡಿದ ಡಾ. ನಾ. ಗೀತಾಚಾರ್ಯ ಅಧ್ಯಯನ ವಿಭಾಗದ ಪರವಾಗಿ ವಿದ್ಯಾರ್ಥಿಗಳಿಗೆ ಅಭಿನಂದನೆ ಸಲ್ಲಿಸಿ ಪ್ರತಿಷ್ಠಾನದ ಒಳತಿಗಾಗಿ ಎಲ್ಲಿದ್ದರೂ ಅಲ್ಲಿಂದಲ್ಲೇ ಶ್ರಮಿಸಬೇಕೆಂದು ಅವರಿಗೆ ಕರೆ ನೀಡಿದರು. ಎಂ.ಫಿಲ್ ಮತ್ತು ಪಿಎಚ್.ಡಿ ಪದವೀಧರರ ಪರವಾಗಿ ವಿದ್ಯಾರ್ಥಿಗಳು ಮಾರ್ಗದರ್ಶಕರಿಗೆ, ಉತ್ತಮ ಶಿಕ್ಷಣ ನೀಡಿ, ಪದವಿ ಗಳಿಸಲು ಸೂಕ್ತ ಮಾರ್ಗದರ್ಶನ ನೀಡಿದ್ದಕ್ಕಾಗಿ ಕೃತಜ್ಞತೆ ಸಲ್ಲಿಸಿದರು. ಅಧ್ಯಕ್ಷ ಭಾಷಣ ಮಾಡಿದ ಮಾನ್ಯ ಕಾರ್ಯದರ್ಶಿಗಳು ಪ್ರತಿಷ್ಠಾನದ ಕಾರ್ಯಚಟುವಟಿಕೆಗಳನ್ನು ಪ್ರಶಂಸಿಸಿ, ಮುಂದಿನ ಎಲ್ಲಾ ಯೋಜನೆಗಳಿಗೂ ಶುಭಹಾರೈಸಿ, ಇಲಾಖೆ ವತಿಯಿಂದ ಎಲ್ಲಾ ರೀತಿಯ ಸಹಾಯ, ಸಹಕಾರ ನೀಡುವ ಆಶ್ವಾಸನೆ ಸಹ ನೀಡಿದರು. ಕಾರ್ಯಕ್ರಮದ ಕೊನೆಯಲ್ಲಿ ಡಾ. ವಿಜಯಾ ಸುಬ್ಬರಾಜ್ ಎಲ್ಲರಿಗೂ ವಂದನೆ ಸಲ್ಲಿಸಿದರು.

ದಿನಾಂಕ: ೧೨-೦೬-೨೦೧೦ರ ಸಂಜೆ ೫-೩೦ ಗಂಟೆಗೆ ಪ್ರತಿಷ್ಠಾನದ ಸಹಯೋಗದಲ್ಲಿ **ಇತಿಹಾಸ ದರ್ಪಣ ವೇದಿಕೆ,** ಇತಿಹಾಸಕ್ಕೆ ಸಂಬಂಧಿಸಿದಂತೆ ವಿಶೇಷ ಉಪನ್ಯಾಸ ಕಾರ್ಯಕ್ರಮವನ್ನು ಏರ್ಪಡಿಸಿತ್ತು, ಈ ವಿಶೇಷ ಕಾರ್ಯಕ್ರಮ ಡಾ. ಎಸ್. ಶ್ರೀಕಂಠಯ್ಯ ದತ್ತಿ, ಪ್ರೊ. ಬಿ. ರಾಮಸ್ವಾಮಿ ದತ್ತಿ ಕಾರ್ಯಕ್ರಮದಡಿ ನಡೆದವು. ಪ್ರಸಿದ್ಧ ಇತಿಹಾಸ ಹಾಗೂ ಪುರಾತತ್ವ ತಜ್ಞ ಡಾ. ಎಂ.ಎಸ್. ಕೃಷ್ಣಮೂರ್ತಿ ಅವರು ತಲಕಾಡಿನ ಇತ್ತೀಚಿನ ಉತ್ಖನನದಿಂದ ಹೊರಹೊಮ್ಮಿದ ಹೊಸ ಸಂಗತಿಯನ್ನೂ ದೃಶ್ಯ ಮಾಧ್ಯಮ ಉಪಯೋಗಿಸಿಕೊಂಡು ಬಹಳ ರಸವತ್ತಾಗಿ ವಿವರಿಸಿದರು.



ಕ.ರಾ.ಪು. ಮತ್ತು ಸಂ.ನಿ ಮೈಸೂರಿನ ನಿರ್ದೇಶಕರಾದ ಡಾ. ಆರ್. ಗೋಪಾಲ್, ಉಪನಿರ್ದೇಶಕ ಶ್ರೀ ಟಿ. ಎಸ್. ಗಂಗಾಧರ್ ಅವರುಗಳು ಉಪಸ್ಥಿತರಿದ್ದರು.

ದತ್ತಿದಾನಿಗಳಾದ ಶ್ರೀಮತಿ ಸಾವಿತ್ರಮ್ಮ ಮತ್ತು ಎಸ್. ರಾಮಚಂದ್ರ ಅವರುಗಳ ಕೆಲ ಬಂಧುಗಳು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ಕೊನೆಯಲ್ಲಿ ಡಾ. ನಾ. ಗೀತಾಚಾರ್ಯ ವಂದಿಸಿದರು. ❐

## ಗ್ರಂಥ ದಾನ

| | |
|---|---|
| **ಬಾಕಿನ ಅವರು (ಗಾಂಧಿಬಜಾರ್ ಸಂಪಾದಕರು)** | **೩೪೦** |
| **ಶ್ರೀ ಸಿ.ಎಸ್. ಗೋವಿಂದರಾವ್, ಬೆಂ** | **೭೨** |
| **ಪ್ರೊ. ಎಲ್.ಎಸ್. ಶೇಷಗಿರಿರಾವ್, ಬೆಂ** | **೧** |
| **ಡಾ. ದೇವರಕೊಂಡಾರೆಡ್ಡಿ, ಬೆಂ** | **೧** |
| **ಶ್ರೀ ಎಸ್. ರಾಮಚಂದ್ರ, ಬೆಂ** | **೧** |

# ಅಭಿನಂದನೆಗಳು

- **ಖಾದ್ರಿಶಾಮಣ್ಣ ಪತ್ರಿಕೋದ್ಯಮ ಪ್ರಶಸ್ತಿ (೨೦೧೦) :** ಹಿರಿಯ ಪತ್ರಕರ್ತ ಶ್ರೀ ಕೆ. ಸತ್ಯನಾರಾಯಣ ಅವರಿಗೆ ಖಾದ್ರಿಶಾಮಣ್ಣ ಅವರ ಜನ್ಮದಿನದಂದು ೦೬/೦೬/೨೦೧೦ ಈ ಪ್ರಶಸ್ತಿಯನ್ನು ನೀಡಲಾಗಿದೆ.

- **ಬಸವ ಪುರಸ್ಕಾರ (೨೦೦೭) :** ಸಿದ್ಧಗಂಗಾಮಠಾಧೀಶ್ವರರಾದ ಡಾ. ಶಿವಕುಮಾರ ಸ್ವಾಮೀಜಿ ಅವರಿಗೆ ಈ ರಾಷ್ಟ್ರೀಯ ಪ್ರಶಸ್ತಿಯನ್ನು ರಾಜ್ಯದ ಮುಖ್ಯಮಂತ್ರಿ ಶ್ರೀ ಯಡಿಯೂರಪ್ಪ ಅವರು ಸಿದ್ಧಗಂಗೆಯಲ್ಲಿ ವಿತರಿಸಿದರು (೧೨ ಲಕ್ಷದ ಚೆಕ್ + ಪ್ರಶಸ್ತಿ ಪದಕ + ಬಸವಣ್ಣನ ಪ್ರತಿಮೆ) (೦೧-೦೪-೨೦೧೦)

- **ಚಾಣಕ್ಯ ಪ್ರಶಸ್ತಿ :** ಭಾರತೀಯ ಸಾರ್ವಜನಿಕ ಸಂಪರ್ಕ ಮಂಡಳಿ ನೀಡುವ ಪ್ರತಿಷ್ಠಿತ ಚಾಣಕ್ಯ ಪ್ರಶಸ್ತಿಯನ್ನು ಮಾಜಿ ಕೇಂದ್ರ ಸಚಿವ ಶ್ರೀ ಮಣಿಶಂಕರ್ ಅಯ್ಯರ್ ದೆಹಲಿಯಲ್ಲಿ, ಬೆಂಗಳೂರಿನ ದೂರದರ್ಶನ ಕೇಂದ್ರದ ಹಿರಿಯ ನಿರ್ದೇಶಕ **ಡಾ. ಮಹೇಶ್ ಜೋಶಿ** ಅವರಿಗೆ ದಿನಾಂಕ : ೦೪-೦೪-೨೦೧೦ರಂದು ಪ್ರದಾನ ಮಾಡಿದರು.

- **ಮಾಸ್ತಿ ಪ್ರಶಸ್ತಿ (೨೦೧೦) :** ಖ್ಯಾತ ವಿಮರ್ಶಕ, ಲೇಖಕ ಡಾ. ಗುರುರಾಜ ಶಾಮಾಚಾರ್ಯ ಆಮೂರ ಅವರಿಗೆ ಸಂದಿದೆ. (೦೪-೦೪-೨೦೧೦)

- **ಸಿದ್ಧಗಂಗಾಶ್ರೀ ಪ್ರಶಸ್ತಿ - ೨೦೧೦ :** ಹಾವೇರಿ ಜಿಲ್ಲೆಯ ಹರವಿಗ್ರಾಮದ ಪಂಡಿತ ದಿವಂಗತ ಚನ್ನಪ್ಪ ಎಣೇಸಿಮೆ ಅವರಿಗೆ ಈ ಬಾರಿಯ ಪ್ರಶಸ್ತಿ ಮರಣೋತ್ತರವಾಗಿ ಲಭಿಸಿದೆ - ಇವರು ಸಿದ್ಧಗಂಗಾಕ್ಷೇತ್ರದ ಹಳೆಯ ವಿದ್ಯಾರ್ಥಿಗಳಾಗಿದ್ದರು. (೧೨-೦೪-೨೦೧೦)

- **ದೇವೇಂದ್ರಕೀರ್ತಿ ದತ್ತಿ ಪ್ರಶಸ್ತಿ :** ಕನ್ನಡ ಸಾಹಿತ್ಯ ಪರಿಷತ್ತು ನೀಡುವ ಈ ಪ್ರಶಸ್ತಿ, 'ಧಾರವಾಡ ಪರಿಸರದಲ್ಲಿ ಜೈನಧರ್ಮ' ಕೃತಿ ರಚನಗಾರರಾದ ಶ್ರೀ ಅಪ್ಪಣ್ಣ ಎಸ್. ಹಂಜೆ ಅವರಿಗೆ ಸಂದಿದೆ (೧೦-೦೪-೧೦)

- **ಚಾವುಂಡರಾಯ ಪ್ರಶಸ್ತಿ (೨೦೧೦):** ಕನ್ನಡ ಸಾಹಿತ್ಯ ಪರಿಷತ್ತು ನೀಡುವ ಈ ಪ್ರಶಸ್ತಿ, ಶ್ರವಣಬೆಳಗೊಳದ ಧವಲೇತರ ಗ್ರಂಥಗಳ ಅನುವಾದ ಯೋಜನೆಗಳ ಸಂಪಾದಕ ಜಯಧವಲ ಗ್ರಂಥ ಪ್ರಕಾಶನದ ಸಂಯೋಜಕ ಮತ್ತು ಪ್ರಾಕೃತ ಪರೀಕ್ಷಾ ವಿಭಾಗದ ಮುಖ್ಯಸ್ಥರಾಗಿರುವ ಡಾ. ಎಂ. ಎ. ಜಯಚಂದ್ರ ಅವರಿಗೆ ನೀಡಲಾಗಿದೆ. (೧೫-೦೪-೧೦).

- **ಟಿಯೆಸ್ಸಾರ್ ಪ್ರಶಸ್ತಿ :** ಪತ್ರಿಕಾಕ್ಷೇತ್ರದಲ್ಲಿ ಅತ್ಯುತ್ತಮ ಸಾಧನೆ ಮಾಡಿರುವ ಶ್ರೀ ಶಿವಾನಂದ ಜೋಶಿ ಅವರಿಗೆ ೨೦೦೭ರ ಪ್ರಶಸ್ತಿ, ದಿವಂಗತ ಡಾ. ಬಿ.ವಿ. ವೈಕುಂಠರಾಜುರವರಿಗೆ ೨೦೦೮ನೇ ಪ್ರಶಸ್ತಿ; ಶ್ರೀ ರಾಜಶೇಖರ ಕೋಟಿ ಅವರಿಗೆ ೨೦೦೯ನೇ ಸಾಲಿನ ಪ್ರಶಸ್ತಿ ಘೋಷಿತವಾಗಿದೆ. (೧೩-೦೪-೧೦)

- **ಅನಕೃ - ನಿರ್ಮಾಣ್ ಪ್ರಶಸ್ತಿ (೨೦೧೦) :** ಡಾ. ಎಸ್. ಎಲ್. ಭೈರಪ್ಪ ಅವರಿಗೆ ನೀಡಲಾಗಿದೆ. (೦೯-೦೫-೧೦)

- **ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ (೨೦೦೯):** ಡಾ. ಶಶಿಕಲಾ ಮೋಳ್ದಿ, ಡಾ. ಗುರುಮೂರ್ತಿ ಪೆಂಡಕೂರು; ಪ್ರೊ. ಕಿ.ರಂ. ನಾಗರಾಜ, ಡಾ. ಪಿ.ಕೆ. ರಾಜಶೇಖರ್ ಮತ್ತು ಮೂಡ್ನಾಕೂಡು ಚಿನ್ನಸ್ವಾಮಿ ಅವರಿಗೆ ನೀಡಲಾಗಿದೆ. ೨೦೦೮ನೇ ಸಾಲಿನ ಪುಸ್ತಕ ಬಹುಮಾನಗಳು ೧೭ ಸಾಹಿತಿಗಳಿಗೆ ಸಂದಿವೆ.

- **ಜಿ. ಪಿ. ರಾಜರತ್ನಂ ಸಾಹಿತ್ಯ ಪರಿಚಾರಕ ಪ್ರಶಸ್ತಿ (೨೦೦೮):** ಪ್ರೊ. ಕಿ. ರಂ. ನಾಗರಾಜ ಅವರಿಗೆ, ೨೦೦೯ನೇ ಸಾಲಿನ ಪ್ರಶಸ್ತಿ ಮಂಡ್ಯ ಜಿಲ್ಲೆಯ ಪಾಂಡವಪುರದ ಸಾಹಿತ್ಯ ಪ್ರಚಾರಕ ಶ್ರೀ ಎಂ. ಅಂಕೇಗೌಡ ಅವರಿಗೆ ನೀಡಲಾಗಿದೆ. (೨೫-೦೪-೨೦೧೦).

- **ಡಾ. ಚಿದಾನಂದ ಪ್ರಶಸ್ತಿ (೨೦೦೯):** ಖ್ಯಾತ ಸಂಶೋಧಕರಿಗೆ ನೀಡಲಾಗುವ ಈ ವಿಶಿಷ್ಟ ಪ್ರಶಸ್ತಿ ಡಾ. ಶ್ರೀನಿವಾಸರಿತ್ತಿ ಅವರಿಗೆ ಸಂದಿದೆ. (೧೦-೦೫-೧೦)

- **ಅನುಪಮಾ ಪ್ರಶಸ್ತಿ:** ಶ್ರೀಮತಿ ಸರೋಜ ನಾರಾಯಣ ಅವರಿಗೆ ನೀಡಲಾಗಿದೆ.

- **ಸೇಡಿಯಾಪು ಪ್ರಶಸ್ತಿ(೨೦೧೦):** ಶತಾವಧಾನಿ ಡಾ. ಆರ್. ಗಣೇಶ್ ಅವರಿಗೆ ರಾಷ್ಟ್ರಕವಿ ಗೋವಿಂದಪೈ ಸಂಶೋಧನಾ ಕೇಂದ್ರ ನೀಡುವ ಈ ಪ್ರಶಸ್ತಿಯನ್ನು ನೀಡಲಾಗಿದೆ. (೦೮-೦೬-೨೦೧೦)

- **ಡಾ. ಮೂಜಗಂ ಪ್ರಶಸ್ತಿ (೨೦೧೦) :** ಖ್ಯಾತ ಸಾಹಿತಿ ಡಾ. ಗುರುಲಿಂಗ ಕಾಪಸೆ ಅವರಿಗೆ ಡಾ. ಮೂಜಗಂ ಅವರ ೭ನೇ ಪುಣ್ಯತಿಥಿ ದಿನವಾದ ೨೬-೫-೨೦೧೦ರಂದು ಈ ಪ್ರಶಸ್ತಿಯನ್ನು ಮೂರುಸಾವಿರ ಮಠ ಪ್ರಾಂಗಣದಲ್ಲಿ ನೀಡಲಾಯಿತು.

- **ಗೌ. ಡಾಕ್ಟರೇಟ್:** ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆ ಅವರಿಗೆ ಕರ್ನಾಟಕ ವಿಶ್ವವಿದ್ಯಾಲಯ ೬೦ನೇ ಘಟಿಕೋತ್ಸವದಲ್ಲಿ ಈ ಪ್ರಶಸ್ತಿಯನ್ನು, ನೀಡಿ ಪುರಸ್ಕರಿಸಿದೆ.

❐

*ಮೇಲ್ಕಂಡ ಎಲ್ಲಾ ಸನ್ಮಾನ್ಯರುಗಳಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಹಾರ್ದಿಕ ಅಭಿನಂದನೆಯೊಡನೆ ಶುಭಾಶಯ ಕೋರುತ್ತದೆ.*

# ಹಸ್ತಪ್ರತಿ ಅಧ್ಯಯನ ಸಮಾವೇಶ



ಪ್ರೊ. ಎಂ. ವಿ. ಸೀತಾರಾಮಯ್ಯ ಅವರು ಹಸ್ತಪ್ರತಿಗಳ ಸಂರಕ್ಷಣೆಗಾಗಿಯೇ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸಂಸ್ಥೆಯನ್ನು ಸ್ಥಾಪಿಸಿ 'ಹಸ್ತಪ್ರತಿಶಾಸ್ತ್ರ'ಕ್ಕೆ ಚಾಲನೆ ನೀಡಿದ ಪ್ರಥಮರು. ವಿ.ವಿ.ಗಳಿಂದ ಮರೆಯಾಗುತ್ತಿದ್ದ ಗ್ರಂಥಸಂಪಾದನಶಾಸ್ತ್ರಕ್ಕೆ ಜೀವ ತುಂಬಿ ಅದನ್ನು ಹಸ್ತಪ್ರತಿಶಾಸ್ತ್ರದೊಂದಿಗೆ ಉಳಿಸಿ ಬೆಳೆಸಿದರು. ನಾಡಿನಾದ್ಯಂತ ಹಸ್ತಪ್ರತಿಶಾಸ್ತ್ರ ಚಳವಳಿಯಾಗಿ ಬೆಳೆಯಿತು. ಇಂದು ಈ ಕ್ಷೇತ್ರದಲ್ಲಿ ಹಲವಾರು ತರುಣ ವಿದ್ವಾಂಸರು ಹಸ್ತಪ್ರತಿಶಾಸ್ತ್ರದ ಸಂಗ್ರಹ, ಸಂರಕ್ಷಣೆ, ಸಂಪ್ರತಿ ಮತ್ತು ಗ್ರಂಥ ಸಂಪಾದನೆಯ ಪಾಠನಿರ್ಣಯದ ಮಿತಿಯಿಂದ ಹೊರಬಂದು ಹೊಸ ದೃಷ್ಟಿಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ. ಹಸ್ತಪ್ರತಿಗಳನ್ನೇ ಆಕರ ವಸ್ತುವನ್ನಾಗಿಸಿ ಬಹುಶಾಸ್ತ್ರೀಯವಾಗಿ ಅಧ್ಯಯನ ಮಾಡಲಾಗುತ್ತಿದೆ. ಹಸ್ತಪ್ರತಿಯ ವಿವರಗಳಿಂದಲೇ ಸಾಹಿತ್ಯ, ಸಂಸ್ಕೃತಿ, ಇತಿಹಾಸ, ಕಲೆ, ಚಿತ್ರಕಲೆ, ಲಿಪಿ, ಭಾಷೆ, ಜನಪದ ಸಂಗತಿಗಳು, ಸಾಮಾಜಿಕ ವಿವರಗಳಂತಹ ಸಾಂಸ್ಕೃತಿಕ ಅಧ್ಯಯನವನ್ನೂ ಧರ್ಮ, ಶಾಸ್ತ್ರ, ಜ್ಯೋತಿಷ್ಯ, ವೈದ್ಯ, ಯೋಗ, ಶಿಕ್ಷಣ, ವಿಜ್ಞಾನ-ತಂತ್ರಜ್ಞಾನ, ಲೌಕಿಕ ಶಾಸ್ತ್ರಗಳು ಮುಂತಾದ ವಿವಿಧ ಕ್ಷೇತ್ರಗಳ ದೃಷ್ಟಿಯಿಂದ ಅಂತರಶಿಸ್ತೀಯ ಅಧ್ಯಯನವನ್ನೂ ಮಾಡಲಾಗುತ್ತಿದೆ. ಹೀಗೆ ಬಹುಮುಖೀ ಅಧ್ಯಯನವಾಗಿ ರೂಪುಗೊಂಡಿರುವ ಹಸ್ತಪ್ರತಿ ಸಾಹಿತ್ಯಕ್ಕೊಂದು ಶಾಸ್ತ್ರದ ಚೌಕಟ್ಟನ್ನು ಕೊಡುವುದಕ್ಕಾಗಿ ಈ ಹಸ್ತಪ್ರತಿಗಳ ಸಂಸ್ಕೃತಿ ಅಧ್ಯಯನವನ್ನು 'ಹಸ್ತಪ್ರತಿ ಅಧ್ಯಯನಶಾಸ್ತ್ರ' ಎಂದು ಹೆಸರಿಸಿ ಪ್ರತಿಷ್ಠಾನದಲ್ಲಿ ಈಗಾಗಲೇ ಅಧ್ಯಯನ ಮಾಡಲಾಗುತ್ತಿದೆ. ಹಸ್ತಪ್ರತಿಶಾಸ್ತ್ರವನ್ನು ಎಂ.ವಿ.ಸೀ. ಅವರು ಚಾಲನೆಗೊಳಿಸಿದಂತೆ 'ಹಸ್ತಪ್ರತಿ ಅಧ್ಯಯನಶಾಸ್ತ್ರ'ವನ್ನು ಅವರ ಶತಮಾನೋತ್ಸವದಲ್ಲೇ ವ್ಯಾಪಕವಾಗಿ ಚಾಲನೆಗೆ ತರಲು ಮತ್ತು ನಾಡಿನಾದ್ಯಂತ ಜಾಗೃತಿ ಮೂಡಿಸಲು ಎಂ.ವಿ.ಸೀ. ಶತಮಾನೋತ್ಸವ ವರ್ಷವನ್ನೇ 'ಹಸ್ತಪ್ರತಿ ಅಧ್ಯಯನ ವರ್ಷ' ಎಂದು ಘೋಷಿಸಲಾಗಿತ್ತು. ಇಡೀ ವರ್ಷ ರಾಜ್ಯಾದ್ಯಂತ ಈ ಅಭಿಯಾನವನ್ನು ನಡೆಸಲಾಯಿತು. ಅದರ ಫಲಶ್ರುತಿಯಂತೆ ಅಂತಿಮವಾಗಿ ಹಸ್ತಪ್ರತಿ ಅಧ್ಯಯನಶಾಸ್ತ್ರಕ್ಕೊಂದು ರೂಪುರೇಷೆ ಸಿದ್ಧಪಡಿಸುವ ಸಲುವಾಗಿ ಶೀಘ್ರದಲ್ಲೆ ರಾಷ್ಟ್ರೀಯ ವಿಚಾರ ಗೋಷ್ಠಿಯನ್ನು ನಡೆಸಲಾಗುತ್ತಿದೆ ಮತ್ತು ಈ ಶತಮಾನೋತ್ಸವದ ನೆನಪಿಗಾಗಿ ಪ್ರತಿ ವರ್ಷ ಹಸ್ತಪ್ರತಿ ಸಮಾವೇಶವನ್ನು ನಡೆಸಲು ಹಸ್ತಪ್ರತಿ ಉಪಸಮಿತಿ ತೀರ್ಮಾನಿಸಿದ್ದೂ ಕಾರ್ಯಸಮಿತಿ ಅನುಮೋದಿಸಿದೆ. ಪ್ರಥಮ ಸಮಾವೇಶವನ್ನು ಧರ್ಮಸ್ಥಳದಲ್ಲಿ ನಡೆಸಲು ಶ್ರೀಶ್ರೀಗಳು ಆಹ್ವಾನಿಸಿದ್ದೂ ಸದ್ಯದಲ್ಲೇ ವ್ಯವಸ್ಥೆಯಾಗಲಿದೆ. ಈ ಕ್ಷೇತ್ರದಲ್ಲಿ ಆಸಕ್ತಿಯುಳ್ಳವರು ಒಂದೊಂದು ಟಿಪ್ಪಣಿಗಳನ್ನು ಈ ಸಮಾವೇಶದಲ್ಲಿ ಮಂಡಿಸಬಹುದು. ಇದೊಂದು ಮುಕ್ತ ಅಧಿವೇಶನ ಹಸ್ತಪ್ರತಿ ಸಂಬಂಧದ ಯಾವುದೇ ವಿಚಾರವನ್ನು ಮಂಡಿಸಲು ಎಲ್ಲರಿಗೂ ಅವಕಾಶವಿರುತ್ತದೆ. ಆಸಕ್ತರು ತಾವು ಮಂಡಿಸಲಿರುವ ವಿಷಯದ ಸಾರಲೇಖವನ್ನೂ ಪ್ರತಿಷ್ಠಾನಕ್ಕೆ ಕಳುಹಿಸಿಕೊಡಲು ಕೋರಿದೆ.

### ಹಸ್ತಪ್ರತಿ ಅಧ್ಯಯನ ಸಮಾವೇಶ

ಮತ್ತು ಈ ಶತಮಾನೋತ್ಸವದ ನೆನಪಿಗಾಗಿ ಪ್ರತಿ ವರ್ಷ ಹಸ್ತಪ್ರತಿ ಸಮಾವೇಶವನ್ನು ನಡೆಸಲು ಹಸ್ತಪ್ರತಿ ಉಪಸಮಿತಿ ತೀರ್ಮಾನಿಸಿದ್ದು ಕಾರ್ಯಸಮಿತಿ ಅನುಮೋದಿಸಿದೆ. ಪ್ರಥಮ ಸಮಾವೇಶವನ್ನು ಧರ್ಮಸ್ಥಳದಲ್ಲಿ ನಡೆಸಲು ಶ್ರೀಶ್ರೀಗಳು ಆಹ್ವಾನಿಸಿದ್ದು ಸದ್ಯದಲ್ಲೇ ವ್ಯವಸ್ಥೆಯಾಗಲಿದೆ. ಈ ಕ್ಷೇತ್ರದಲ್ಲಿ ಆಸಕ್ತಿಯುಳ್ಳವರು ಒಂದೊಂದು ಟಿಪ್ಪಣಿಗಳನ್ನು ಈ ಸಮಾವೇಶದಲ್ಲಿ ಮಂಡಿಸಬಹುದು. ಇದೊಂದು ಮುಕ್ತ ಅಧಿವೇಶನ ಹಸ್ತಪ್ರತಿ ಸಂಬಂಧದ ಯಾವುದೇ ವಿಚಾರವನ್ನು ಮಂಡಿಸಲು ಎಲ್ಲರಿಗೂ ಅವಕಾಶವಿರುತ್ತದೆ. ಆಸಕ್ತರು ತಾವು ಮಂಡಿಸಲಿರುವ ವಿಷಯದ ಸಾರಲೇಖವನ್ನು ಪ್ರತಿಷ್ಠಾನಕ್ಕೆ ಕಳುಹಿಸಿಕೊಡಲು ಕೋರಿದೆ.

### ಎಂ.ವಿ.ಸೀ. ಶತಮಾನೋತ್ಸವ ಸಂಪುಟ

ಎಂ.ವಿ.ಸೀತಾರಾಮಯ್ಯನವರ ಶತಮಾನೋತ್ಸವ ಸಂದರ್ಭದಲ್ಲಿ ಡಾ. ಎಚ್. ಎಸ್. ವೆಂಕಟೇಶಮೂರ್ತಿಯವರ ಸಂಪಾದಕತ್ವದಲ್ಲಿ ಶತಮಾನೋತ್ಸವ ಸಂಸ್ಮರಣ ಸಂಪುಟವನ್ನು ಹೊರತರಲು ಉತ್ಸವ ಸಮಿತಿ ತೀರ್ಮಾನಿಸಿದ್ದು ಈ ಬಗೆಗಿನ ಪ್ರಯತ್ನಗಳು ನಡೆಯುತ್ತಿವೆ.

ಎಂ. ವಿ. ಸೀತಾರಾಮಯ್ಯನವರನ್ನು ಹತ್ತಿರದಿಂದ ಬಲ್ಲ, ಅವರೊಡನೆ ನಿಕಟವಾದ ಸಂಪರ್ಕವಿಟ್ಟುಕೊಂಡಿದ್ದ, ಅವರೊಡನಾಟದ ಆತ್ಮೀಯವಾದ ನೆನಪುಗಳನ್ನು ಹೊಂದಿರುವವರು ತಮ್ಮ ನೆನಪುಗಳನ್ನು ಸಂಕ್ಷಿಪ್ತವಾಗಿ ಬರೆದು ಕಳುಹಿಸಬೇಕಾಗಿ ಕೋರಿಕೆ. ಸೂಕ್ತ ಕಂಡವುಗಳನ್ನು ಈ ಸಂಪುಟದಲ್ಲಿ ಪ್ರಕಟಿಸಲಾಗುವುದು.

### ಎಂ.ವಿ.ಸೀ.ಯವರ ಪತ್ರ, ಮುನ್ನುಡಿ, ವಿಮರ್ಶೆಗಳಿಗೆ ಆಹ್ವಾನ

ಎಂ. ವಿ. ಸೀ. ಶತಮಾನೋತ್ಸವ ಸಂದರ್ಭದಲ್ಲಿ ಕನ್ನಡ ಸಂಸ್ಕೃತಿ ಇಲಾಖೆ ಎಂ.ವಿ.ಸೀ. ಸಮಗ್ರ ಸಾಹಿತ್ಯ ಸಂಪುಟಗಳನ್ನು ಪ್ರಕಟಿಸುತ್ತಿದೆ. ಈಗಾಗಲೆ ವಿವಿಧ ಸಂಪುಟಗಳಿಗೆ ಸಂಪಾದಕರನ್ನು ನಿಯೋಜಿಸಲಾಗಿದೆ. ಎಂ.ವಿ.ಸೀ. ಬಿಡಿ ಬರಹಗಳ ಸಂಪುಟದಲ್ಲಿ ಆರು ಸಂಪುಟಗಳು ಮುದ್ರಣದಲ್ಲಿವೆ.

ಎಂ.ವಿ.ಸೀ.ಯವರು ಬರೆದಿರುವ ಪತ್ರಗಳು, ಮುನ್ನುಡಿಗಳ ವಿಮರ್ಶೆಗಳನ್ನು ಪ್ರಕಟಿಸಲಾಗುತ್ತಿದ್ದು ಇಂತಹ ಅಮೂಲ್ಯ ಬರಹಗಳನ್ನು ಹೊಂದಿರುವವರು ದಯಮಾಡಿ ಈ ಕೆಳಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕಾಗಿ ಕೋರಿಕೆ. ಈ ಸಂಪುಟದಲ್ಲಿ ಸೂಕ್ತ ಕಂಡಂತೆ ಬಳಸಿಕೊಳ್ಳಲಾಗುವುದು ಅಥವಾ ಪ್ರತಿಷ್ಠಾನ ಇ-ಮೇಲ್ ವಿಳಾಸಕ್ಕೂ ನೇರವಾಗಿ ಕಳುಹಿಸಬಹುದಾಗಿದೆ.

**ಕಾರ್ಯದರ್ಶಿಗಳು**

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬಿ.ಎಂ.ಶ್ರೀ. ಕಲಾಭವನ,**

೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು – ೫೬೦ ೦೧೯. ದೂರವಾಣಿ : ೨೬೬೧೫೮೭೭

ಇ-ಮೇಲ್ : bmsritrust@gmail.com ವೆಬ್‌ಸೈಟ್ : www:bmsri.org

## ಸಾದರ ಸ್ವೀಕಾರ

**ಅಂಗಡಿಯ ಕನ್ನಡ ನುಡಿ :** ಲೇಖಕ : ಲೋಹಿತ್ ಬಿ.ಆರ್., ಪ್ರಕಾಶಕರು: ಬನವಾಸಿ ಬಳಗ, ಟಾಟಾ ಸಿಲ್ಕ್ ಫಾರಂ, ಬೆಂಗಳೂರು, ವರ್ಷ: ೨೦೧೦, ಪುಟ : ೫೬.

**ಆಗೊಂದಷ್ಟು –ಈಗೊಂದಷ್ಟು :** ಲೇಖಕ : ದಾ. ಭೀ. ಪ್ರಾಣೇಶರಾವ್, ಸುಮನ ಪ್ರಕಾಶಕರು, ಬೆಂಗಳೂರು, ವರ್ಷ : ೨೦೦೯, ಪುಟ: ೧೫೬, ಬೆಲೆ : ೧೦೦/–.

**ಬೇಂದ್ರೆ ಕಾಳಿದಾಸ ಕಾವ್ಯಕಾರಣ :** ಲೇಖಕ : ವೀಣಾ ಕುಲಕರ್ಣಿ, ಪ್ರಕಾಶನ : ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ, ವರ್ಷ: ೨೦೦೮, ಪುಟ: ೩೬೬, ಬೆಲೆ : ೧೫೦/–.

**ನಾಡಿಗರ ಕಾವ್ಯಜಗತ್ತು :** ಲೇಖಕ : ವತ್ಸಲಾ ನಾಡಿಗ್, ಪ್ರಕಾಶಕರು: ಸ್ವಪ್ನ ಬುಕ್ ಹೌಸ್, ಬೆಂಗಳೂರು, ವರ್ಷ: ೨೦೧೦, ಪುಟ: ೪೩೨, ಬೆಲೆ : ೧೯೫/–

**ಏನ್ ಗುರು ಕಾಫಿ ಆಯ್ತಾ ಗುಟುಕು – ೧ :** ಪ್ರಕಾಶಕರು : ಬನವಾಸಿ ಬಳಗ, ಟಾಟಾ ಸಿಲ್ಕ್ ಫಾರಂ, ಬೆಂಗಳೂರು, ಸಂಪಾದಕರು: ಆನಂದ್ ಜಿ., ವರ್ಷ : ೨೦೦೯, ಪುಟ : ೩೨೮.

**ಏನ್ ಗುರು ಕಾಫಿ ಆಯ್ತಾ ಗುಟುಕು – ೨ :** ಪ್ರಕಾಶಕರು : ಬನವಾಸಿ ಬಳಗ, ಸಂಪಾದಕರು : ಆನಂದ್ ಜಿ., ವರ್ಷ : ೨೦೦೯, ಪುಟ: ೨೩೨.

**ಸುಬ್ಬಿ ಮತ್ತು ಇತರ ಕವಿತೆಗಳು :** ಪ್ರಕಾಶಕರು : ಮೋಹನದಾಸ್ ಧಾವಸ್ಕರ್, ಲೇಖಕರು : ಮೋಹನದಾಸ್ ಧಾವಸ್ಕರ್, ಬೆಲೆ: ೯೦–೦೦, ವರ್ಷ : ೨೦೧೦, ಪುಟ : ೭೬.

**ವಿದ್ಯಾರ್ಥಿಗಳಿಗಾಗಿ ಡಿವಿಜಿ ಕಗ್ಗದ ಪದ್ಯಗಳು :** ಸಂಗ್ರಹ ಮತ್ತು ಅನುವಾದ: ಪ್ರೊ. ಜಿ. ಅಶ್ವತ್ಥನಾರಾಯಣ, ಪ್ರಕಾಶಕರು: ಶ್ರೀ ರಾಮಚಂದ್ರ ಮತ್ತು ಶ್ರೀಮತಿ ಲಲಿತಾರಾಮಚಂದ್ರ, ಚಿದಂಬರ ಧಾರ್ಮಿಕ ಗ್ರಂಥಾಲಯ, ಬೆಲೆ : ಉಚಿತ, ವರ್ಷ: ೨೦೧೦, ಪುಟ: ೭೯. ❑

## ಎಂ.ವಿ.ಸೀ. ಶತಮಾನೋತ್ಸವ ನಿಧಿ

| | | |
|---|---|---|
| ೧) | ಕರ್ನಾಟಕ ಕೈಗಾರಿಕಾ ಸಂಘಗಳ ಒಕ್ಕೂಟ, ಬೆಂಗಳೂರು | ರೂ. ೧,೦೦೦–೦೦ |
| ೨) | ಪ್ರೊ. ಅ.ರಾ. ಮಿತ್ರ, ಬೆಂಗಳೂರು | ೪೦೦–೦೦ |
| ೩) | ಪ್ರೊ. ಎಲ್.ಎಸ್. ಶೇಷಗಿರಿರಾವ್, ಬೆಂಗಳೂರು | ೪೦೦–೦೦ |
| ೪) | ಡಾ. ನಾ. ಗೀತಾಚಾರ್ಯ, ಬೆಂಗಳೂರು | ೬೦೦–೦೦ |
| ೫) | ಶ್ರೀ ಎಸ್.ಟಿ. ರಾಧಾಕೃಷ್ಣ, ಬೆಂಗಳೂರು | ೨೦೦–೦೦ |
| ೬) | ನಾಗನಾಥಪುರ ಮೈಕೋ ಕನ್ನಡ ಸಂಘ, ಬೆಂಗಳೂರು | ೧,೦೦೦–೦೦ |
| ೭) | ಡಾ. ದೇವರಕೊಂಡಾರೆಡ್ಡಿ, ಬೆಂಗಳೂರು | ೨೦೦–೦೦ |

### ದತ್ತಿನಿಧಿ

ಶ್ರೀಮತಿ ಪ್ರಭಾ ಮೂರ್ತಿ, ಬೆಂಗಳೂರು — ೫೦,೦೦೦–೦೦

(ಕೆ.ಪಿ.ರಾವ್ ದತ್ತಿ ನಿಧಿಗಾಗಿ)

**ದಾನಿಗಳಿಗೆ ಪ್ರತಿಷ್ಠಾನ ಹೃತ್ಪೂರ್ವಕವಾದ ಕೃತಜ್ಞತೆ ಅರ್ಪಿಸುತ್ತದೆ**

ಅಚ್ಚಾದ ಪುಸ್ತಕ

ತೆರೆದ–ಅಂಚೆ



ವಿಳಾಸ


ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭


ಶ್ರೀಮತಿ/ಶ್ರೀ............ 289. ರಮಾ ಟಿ. ಚಿಕ್ಕೂರ್
ನಂ.806, (ಮಹಡಿ),
61ನೇ ಅಡ್ಡರಸ್ತೆ, ರಾಜಾಜಿನಗರ,
ಬೆಂಗಳೂರು – 560 010.





ಮುದ್ರಕರು : ಇಳಾ ಮುದ್ರಣ, ನಂ. ೩೬, ೪೦ ಅಡಿ ರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು – ೨೬ ✆ : ೨೬೭೫೭೧೯೫
'ವಾರ್ತಾಪತ್ರ' ಪ್ರಾಯೋಜಕರು: ಇಳಾ ಮುದ್ರಣ, ಬೆಂಗಳೂರು–೨೬